ದೇವರ ಕೊಂಡಾರೆಡ್ಡಿ

# ಶಿವಪುರದ ಶಾಸನ

ಮೈಸೂರು ಜಿಲ್ಲೆಯ ಗುಂಡ್ಲುಪೇಟೆಯಿಂದ ಬಾಚಹಳ್ಳಿಗೆ ಹೋಗುವ ದಾರಿಯಲ್ಲಿ ಕಲ್ಲು ಕಟ್ಟೆ ಅಣೆ ಕಟ್ಟೆಗೂ ಶಿವಪುರಕ್ಕೂ ಮಧ್ಯೆ ರಸ್ತೆಯ ಬಲಬದಿಗೆ ಈ ಶಾಸನವಿದೆ. ಶಿಲಾಶಾಸನವು ಮುಂದಕ್ಕೆ ವಾಲಿದ್ದು, ಶಾಸನವಿರುವ ಭಾಗ ತಕ್ಷಣ ಕಾಣಬರುವುದಿಲ್ಲ. ಶಾಸನವಿರುವ ಪ್ರದೇಶದ ಹೊಲದಲ್ಲಿ ಹಿಂದೆ ಗ್ರಾಮವಿದ್ದಿರಬಹುದಾದ ಲಕ್ಷಣಗಳು ಕಾಣಬರುತ್ತವೆ.

ಶಾಸನವು ೧.೨೫ ಮೀಟರ್ ಎತ್ತರ ೧.೧೦ ಮೀಟರ್ ಅಗಲವಿದೆ. ಶಾಸನದ ಮೇಲ್ಭಾಗದಲ್ಲಿ ಹಸುಕರುಗಳನ್ನು ಕೊರೆದಿದೆ ಬಳಸಿದ ಕಲ್ಲು ಕಣ ಶಿಲೆಯಾಗಿದ್ದು ಅಲ್ಲಲ್ಲಿ ಉಬ್ಬು ತಗ್ಗುಗಳಿಂದ ಕೂಡಿದ್ದು, ಅಕ್ಷರಗಳನ್ನು ಆಳವಾಗಿ ಕೆತ್ತಿರುವುದಿಲ್ಲ. ಶಾಸನದಲ್ಲಿ ೯ ಸಾಲುಗಳು ಪೂರ್ತಿ ಕಾಣುತ್ತವೆ. ಉಳಿದ ಸಾಲುಗಳಲ್ಲಿ ೧೦, ೧೧ ಮತ್ತು ೧೨ ನೇ ಸಾಲುಗಳಲ್ಲಿ ಕೆಲವು ಭಾಗ ಮಾತ್ರ ಕಾಣುತ್ತವೆ. ಉಳಿದಂತೆ ಮಣ್ಣಲ್ಲಿ ಸೇರಿ ಹೋಗಿವೆ.

ಸಾಲಿನ ಪ್ರಾರಂಭದಲ್ಲಿ ಅಕ್ಷರ ಚಿಕ್ಕದಾಗಿದ್ದು, ಬರಬರುತ್ತಾ ದಪ್ಪವಾಗುತ್ತಾ ಹೋಗಿವೆ. ಅನುಸ್ವಾರಕ್ಕಿಂತ ಅನುನಾಸಿಕವನ್ನು ಹೆಚ್ಚಾಗಿ ಬಳಸಿರುತ್ತಾರೆ. ಶಾಸನ ಪಾಠಪೂರ್ಣವಾಗಿ ಕನ್ನಡದಲ್ಲಿದೆ. ಅನೇಕ ಕಡೆ ಶಾಸನ ಪಾಠವನ್ನು ಸ್ಪಷ್ಟವಾಗಿ ಓದುವುದು ಮತ್ತು ಅರ್ಥೈಸುವುದು ಬಹು ಕಷ್ಟ. 'ರಳ'ದ ಪ್ರಯೋಗ ಸ್ಪಷ್ಟವಾಗಿದೆ. ಅಕ್ಷರಗಳಲ್ಲಿ 'ಪ, ಮ, ಲ, ನ' ಮುಂತಾದ ಅಕ್ಷರಗಳು೧೦ನೇ ಶತಮಾನದ ಉತ್ತರಾರ್ಧಕ್ಕೆ ಹಾಕಬಹುದಾಗಿದೆ. ಆದರೂ ಹೆಗ್ಗಡದೇವನ ಕೋಟೆ ತಾಲೂಕಿನ ಶಾಸನ (ಎ.ಕ. III (ಪು) ಹೆ.ಕೋ. ೫೯) ಮತ್ತು ನಂಜನಗೂಡಿನ ಶಾಸನ (ಎ.ಕ.III (ಪು) ನಂ.ಗೂ ೨೧೩) ಗಳಲ್ಲಿ ಅಯ್ಯಾವೊಳೆ ಐನೂರ್ವ್ವರ ಉಲ್ಲೇಖವಿರುವುದರಿಂದಲೂ, ಅವುಗಳ ಕಾಲ ಕ್ರಮಾವಾಗಿ ಕ್ರಿ.ಶ. ೧೦೩೩ ಮತ್ತು ೧೦೧೫ ಆಗಿರುವುದರಿಂದ ಇವುಗಳ ಸರಿಸುಮಾರಿನಲ್ಲಿಯೇ ಈ ಶಾಸನ ಉದಿಸಿರಬೇಕು. ಹೀಗಾಗಿ ಬಹುಶಃ ಸು' ಕ್ರಿ.ಶ. ೧೦೨೦ಕ್ಕೆ ಹಾಕಬಹುದಾಗಿದೆ. ಶಾಸನದಲ್ಲಿ ಐನೂರ್ವರ ಸಮಯದ ಎಟ್ಟಿತ್ತರ ಉಲ್ಲೇಖವಿದ್ದು ಅದು ಅಂಗ, ವೆಂಗಿ, ಕಳಿಂಗ, ಕಾಶ್ಮೀರ, ಸಿಂಗಳ, ಚಕ್ರಗೊಟ್ಟ ಮುಂತಾದ ದೇಶಗಳೊಂದಿಗೆ ವ್ಯಾಪಾರ ನಡೆಸುತ್ತಿದ್ದರೆಂಬಂತೆ ಹೇಳಿರುತ್ತಾರೆ. ಇವರು ಹರಿಹರ, ಭಗವತಿ, ಬ್ರಹ್ಮ ಮುಂತಾದ ದೈವಗಳ ಆರಾಧಕರಾಗಿದ್ದರು. ಇವರು ತಮ್ಮನ್ನು ಭಟರಿಯ ಮಕ್ಕಳೆಂದು ಕರೆದುಕೊಂಡಿದ್ದಾರೆ. ಈ ಎಟ್ಟಿತ್ತರ ಸಮಯದವರು ಕುಪ್ಪದ ಭಗವತಿಗೆ ದಾನ ನೀಡುತ್ತಾರೆ.

ಈ ಶಾಸನದಲ್ಲಿ ಕೊಡಗೂರ್ನಾಡು, ಕುಡುಂಬಿನಾಡು ಮಲೆನಾಡು, ಕೊಜ್ಗನಾಡಿನ ಉಲ್ಲೇಖ ಬರುತ್ತದೆ. ಕುಪ್ಪ ಎಂಬ ಊರಿನ ಉಲ್ಲೇಖ ಬರುತ್ತದೆ.

ಈಗ ಶಾಸನವಿರುವ ಸ್ಥಳದ ಹಿಂದಿನ ಹೊಲದ ಬಯಲೇ ಆಗಿದೆ, ಈ ಊರು. ಈ ಹೊಲವನ್ನು ಕುಪ್ಪದ ಹೊಲವೆಂದು ಈಗಲೂ ಕರೆಯುತ್ತಾರೆ. 'ಕುಪ್ಪದ ಭಗವತಿ' ಎಂದು ಕರೆಯುವ ದೇವಾಲಯವು ಈಗಿನ ಕಲ್ಲುಕಟ್ಟೆ ಅಣೆಕಟ್ಟೆಯಲ್ಲಿ ಮುಳುಗಿರುವ ದೇವಾಲಯಗಳಲ್ಲಿ ಒಂದಾಗಿರಬೇಕು.

ಶಿವಪುರದ ಶಾಸನ ಪಾಠ

೧.೨೫ ಮೀ X ೧.೧೦ ಮೀ.

1. ಸ್ವಸ್ತಿ ಸಮಸ್ತಾಙ್ಗಬೆಙ್ಗೆ ಕಳಿಙ್ಗ ಕಾಶ್ಮೀರ ಸಿಙ್ಗಳ ದ್ವೀಪ ಪಾರಸ.ಗ.

2. ಬರ್ಬರ ಸ್ವರ್ಣ್ನ ವಿಷಯ ಮಙ್ಗಳ ಮಾಪನ ಬೊಲ್ಲ ಗುರ್ಜ್ಜರ· ಶ್ರೇಷ್ಠ ಮಾ.....

3. ದಯಾ ತ್ರಿಮುಟಿ ಕೋ ಶ್ಥಳ ತುರುಷ್ಕ ಯುಧಯಾಣ್ಡ ಲಾ

4. ವಿ ಹಿಮಮನ್ತ ಭವ್ವಮ್ಬರುವ ಚಕ್ರಗೊಟ್ಟ ಬಲಿ ವಿಷ

5. ಯ ನಾಳಿಕೇಸರಮ್ಭೋದಿತ ಪುಣ್ಡರೀಕ ಲಮ್ಬಕ

6. ಚೀನಮಹಚೀನ ಸಕ್ಷಿದೆ ಜಮ್ಬುದ್ವೀಪ ಹರಿ ಹರ ಭ

7. ಗವತಿ ಬ್ರಹ್ಮಾಕಟ್ವಾಜ್ಗಧ್ವಜ ವಿಜಯ ಬೋಗವತಿ ಪು

8. ರಪರಮೇಶ್ವರ ಅಯ್ಯಾವೊಟಿಯವಾತರ ಶ್ರೀಮ(ತ್) ಭಟರಿಯ

9. ಮಕ್ಕಳಪ್ಪಯ್ಯೂರ್ವೋರು ಕುಡುಗೂರ್ನಾಡು ಜ್ಜುಡುಮ್ಬಿನಾಡುಮ್ಮಲೆನಾಡು ಕೊಙ್ಗು

10. ..........ಕೊಡುತೋದನ್ನಾಡೆರಡೆಟ್ಟಿತ್ತರ ಸಮಯ ಮಿಟ್ಟು ಕುಪ್ಪ

11. ದಭಗವತಿಗೆ ವಾಲುನಿಲಿಯ ಶಾಸನಮಾಗೆ ಕೊಟ್ಟಾರ್ ಇದನಟಿ ದೆನ್ನಾ

12. ........ ವೊಣ್ಡ ಪಟ್ಟಣ ಮು(ಂ) ಅಯ್ಯವೊ ಟಿಯುಮನ

(ಇಲ್ಲಿಂದ ಮುಂದೆ ಮಣ್ಣಿನಲ್ಲಿ ಸೇರಿದೆ)